## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 695 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 04.03.2021 |
| ಉತ್ತರಿಸಬೇಕಾದವರು | ಮಾನ್ಯ ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಪ್ರತಿಯೊಂದು ಗ್ರಾಮದಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರವಾದ ಮಾಹಿತಿ ನೀಡುವುದು) | ಬೀದರ್ ಜಿಲ್ಲೆಯ ವಿವಿಧ ಅನಧಿಕೃತ ಸ್ಥಳಗಳಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿರುತ್ತದೆ. ಅಕ್ರಮವಾಗಿ ಮದ್ಯ ಮಾರಾಟ ಮಾಡುವವರನ್ನು ಪತ್ತೆಹಚ್ಚಿ ಅಂತಹವರ ವಿರುದ್ಧ ಅಬಕಾರಿ ಕಾಯ್ದೆ ಮತ್ತು ನಿಯಮಗಳನ್ವಯ ಪ್ರಕರಣಗಳನ್ನು ದಾಖಲು ಮಾಡುವ ಮೂಲಕ ಅಕ್ರಮಗಳನ್ನು ತಡೆಗಟ್ಟುವ ಕ್ರಮಗಳನ್ನು ಕೈಗೊಳ್ಳಲಾಗಿದೆ. |
| ಆ) | ಜಿಲ್ಲೆಯಲ್ಲಿ ಮದ್ಯ ಮಾರಾಟ ಲೈಸನ್ಸ್ ಇರುವ ಅಂಗಡಿಗಳಲ್ಲೂ ಅಕ್ರಮವಾಗಿ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮವೇನು; | ಬೀದರ್ ಜಿಲ್ಲೆಯಲ್ಲಿ ಮದ್ಯ ಮಾರಾಟ ಸನ್ನದು ಇರುವ ಮಳಿಗೆಗಳಲ್ಲಿ ಸನ್ನದು ಷರತ್ತು ಉಲ್ಲಂಘನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಹೀಗೆ ಸನ್ನದು ಷರತ್ತು ಉಲ್ಲಂಘನೆ ಮಾಡುವ ಸನ್ನದುಗಳ ವಿರುದ್ಧ ಮೊಕದ್ದಮೆಗಳನ್ನು ದಾಖಲಿಸಿ ಕ್ರಮಕೈಗೊಳ್ಳಲಾಗಿರುತ್ತದೆ. ಹೀಗೆ ದಾಖಲಾದ ಮೊಕದ್ದಮೆಗಳು ದಂಡ ವಿಧಿಸಿ ಇತ್ಯರ್ಥಪಡಿಸಬಹುದಾದ ಪ್ರಕರಣಗಳಾಗಿದ್ದು ಅಬಕಾರಿ ಕಾನೂನಿನ್ವಯ ಸೂಕ್ತ ದಂಡ ವಿಧಿಸಿ ಪ್ರಕರಣಗಳನ್ನು ಇತ್ಯರ್ಥಪಡಿಸಲಾಗಿರುತ್ತದೆ. |
| ಇ) | ಜಿಲ್ಲೆಯಲ್ಲಿ ಸಿಎಲ್2, ಸಿಎಲ್4, ಸಿಎಲ್7, ಸಿಎಲ್9, ಸಿಎಲ್ 11ಸಿ, ಮದ್ಯ ಮಾರಾಟದ ಅಂಗಡಿಗಳು ಎಷ್ಟು ಇವೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | **2020-21ನೇ ಸಾಲಿಗೆ ಬೀದರ್ ಜಿಲ್ಲೆಯಲ್ಲಿರುವ ಅಬಕಾರಿ ಸನ್ನದುಗಳ ವಿವರ (ಫೆಬ್ರವರಿ 2021ರ ಅಂತ್ಯಕ್ಕೆ)** |

| ಕ್ರ ಸಂ | ತಾಲ್ಲೂಕುಗಳು | ಸನ್ನದಿನ ವಿಧ ಹಾಗೂ ಸಂಖ್ಯೆ | | | | | | |
|---|---|---|---|---|---|---|---|---|
| | | CL-2 | CL-4 | CL-7 | CL-9 | CL-11C | ಇತರೆ | ಒಟ್ಟು |
| 1 | ಬೀದರ್ | 27 | 0 | 09 | 12 | 11 | 4 | 63 |
| 2 | ಭಾಲ್ಕಿ | 13 | 0 | 02 | 02 | 03 | 0 | 20 |
| 3 | ಬಸವಕಲ್ಯಾಣ | 12 | 0 | 05 | 10 | 07 | 0 | 34 |
| 4 | ಹುಮನಾಬಾದ್ | 18 | 1 | 10 | 05 | 03 | 0 | 37 |
| 5 | ಔರಾದ್ | 07 | 0 | 03 | 02 | 05 | 0 | 17 |
| | ಒಟ್ಟು | 77 | 1 | 29 | 31 | 29 | 04 | 171 |

ಈ) ಜಿಲ್ಲೆಯಲ್ಲಿ ಮದ್ಯ ಮಾರಾಟದ ಅಂಗಡಿಗಳಿಗೆ ವಿಧಿಸಿರುವ ದಂಡ ಎಷ್ಟು; (ವಿವರವಾದ ಮಾಹಿತಿ ನೀಡುವುದು)

ಬೀದರ್ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಮದ್ಯ ಮಾರಾಟ ಸನ್ನದುಗಳ ವಿರುದ್ಧ ಸನ್ನದು ಷರತ್ತು ಉಲ್ಲಂಘನೆಗೆ ಸಂಬಂಧಿಸಿದಂತೆ ದಾಖಲಿಸಿದ ಪ್ರಕರಣಗಳು ಹಾಗೂ ವಸೂಲಿಸಿದ ದಂಡದ ಮೊತ್ತದ ವಿವರಗಳು ಕೆಳಕಂಡಂತೆ.

| ಅಬಕಾರಿ ಸಾಲು (ಜುಲೈ ರಿಂದ ಜೂನ್ ವರೆಗೆ) | ಸನ್ನದುಗಳ ವಿರುದ್ಧ ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | ವಸೂಲಿಸಲಾದ ದಂಡದ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 2018–19 | 187 | 27.15 |
| 2019–20 | 165 | 24.72 |
| 2020–21 (ಫೆಬ್ರವರಿ ಅಂತ್ಯಕ್ಕೆ) | 148 | 15.80 |
| ಒಟ್ಟು | 500 | 67.67 |

| | | |
|---|---|---|
| ಉ) | ಜಿಲ್ಲೆಯಲ್ಲಿ ಕಳ್ಳ ಭಟ್ಟಿ ಸಾರಾಯಿ ಘಟಕಗಳು ಇವೆಯೇ; ಇದ್ದಲ್ಲಿ, ಕಡಿವಾಣ ಹಾಕಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಹಾಗೂ ದಾಖಲಾಗಿರುವ ಪ್ರಕರಣಗಳೆಷ್ಟು? (ವಿವರವಾದ ಮಾಹಿತಿ ಒದಗಿಸುವುದು) | ಬೀದರ್ ಜಿಲ್ಲೆಯಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ತಯಾರು ಮಾಡುವ ಹನ್ನೊಂದು ಕೇಂದ್ರಗಳನ್ನು ಗುರುತಿಸಲಾಗಿರುತ್ತದೆ.<br>ಇಂತಹ ಕಳ್ಳಭಟ್ಟಿ ಕೇಂದ್ರಗಳ ವಿರುದ್ಧ ಸತತವಾಗಿ ದಾಳಿ ನಡೆಸಿ ಅಂತಹ ಚಟುವಟಿಕೆಗಳಲ್ಲಿ ತೊಡಗಿರುವವರ ವಿರುದ್ಧ ಮೊಕದ್ದಮೆಗಳನ್ನು ದಾಖಲಿಸಿ ದಸ್ತಗಿರಿಗೊಳಪಡಿಸಿ ನ್ಯಾಯಾಲಯಕ್ಕೆ ಒಪ್ಪಿಸಲಾಗುತ್ತಿದೆ. ಗ್ರಾಮ ಸಭೆಗಳ ಮೂಲಕ ಗ್ರಾಮಸ್ಥರಿಗೆ ಕಳ್ಳಭಟ್ಟಿ ಸಾರಾಯಿ ತಯಾರಿಕೆ ಮತ್ತು ಸೇವನೆ ವಿರುದ್ಧ ಜಾಗೃತಿಯನ್ನು ಮೂಡಿಸಲಾಗುತ್ತಿದೆ.<br>ಬೀದರ್ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಕಳ್ಳಭಟ್ಟಿ ಸಾರಾಯಿ ಸಂಬಂಧ ದಾಖಲಿಸಿದ ಪ್ರಕರಣಗಳ ವಿವರವು ಈ ಕೆಳಕಂಡಂತಿದೆ:- |

| ಅಬಕಾರಿ ಸಾಲು (ಜುಲೈ ರಿಂದ ಜೂನ್ ವರೆಗೆ) | ಕಳ್ಳಭಟ್ಟಿ ಸಾರಾಯಿ ಸಂಬಂಧ ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ |
|---|---|
| 2018–19 | 11 |
| 2019–20 | 59 |
| 2020–21 (ಫೆಬ್ರವರಿ ಅಂತ್ಯಕ್ಕೆ) | 24 |
| **ಒಟ್ಟು** | **94** |

ಆಇ 09 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು